

# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 111(774)
ಸದಸ್ಯರ ಹೆಸರು : ಶ್ರೀ.ಮರಿತಿಬ್ಬೇಗೌಡ (ಶಿಕ್ಷಕರ ಕ್ಷೇತ್ರ)
ಉತ್ತರಿಸಬೇಕಾದ ದಿನಾಂಕ : 05-03-2021
ಉತ್ತರಿಸುವ ಸಚಿವರು : ಮಾನ್ಯ ಕೈಮಗ್ಗ ಮತ್ತು ಜವಳಿ ಹಾಗೂ ಅಲ್ಪಸಂಖ್ಯಾತರ ಕಲ್ಯಾಣ ಸಚಿವರು

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ ಯಡಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ವಸತಿ ಶಾಲೆಗಳ ಸಂಖ್ಯೆ ಎಷ್ಟು; | ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಯಡಿಯಲ್ಲಿ ಬರುವ ವಸತಿ ಶಾಲೆಗಳ ವಿವರ ಈ ಕೆಳಕಂಡಂತಿವೆ: |

| ಕ್ರ.ಸಂ | ವಸತಿ ಶಾಲೆ | ಶಾಲೆಗಳ ಸಂಖ್ಯೆ |
|---|---|---|
| 1 | ಮೊರಾರ್ಜಿ ದೇಸಾಯಿ ವಸತಿ ಶಾಲೆ | 100 |
| 2 | ಮಾದರಿ ವಸತಿ ಶಾಲೆ (ನವೋದಯ) | 08 |
| 3 | ಸರ್ಕಾರಿ ಮುಸ್ಲಿಂ ವಸತಿ ಶಾಲೆ | 05 |
| | ಒಟ್ಟು | 113 |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಆ) | ಸದರಿ ಶಾಲೆಗಳಲ್ಲಿ ಮಂಜೂರಾದ ಹಾಗೂ ಖಾಲಿ ಇರುವ ಹುದ್ದೆಗಳ ಸಂಖ್ಯೆ ಎಷ್ಟು; (ಬೋಧಕ/ಬೋಧಕೇತರ ಹುದ್ದೆಗಳ ವಿವರ ಪ್ರತ್ಯೇಕವಾಗಿ ನೀಡುವುದು) | ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಯಡಿಯಲ್ಲಿ ವಸತಿ ಶಾಲೆಗಳಲ್ಲಿ ಮಂಜೂರಾದ/ಖಾಲಿ ಇರುವ ಹುದ್ದೆಗಳ ವಿವರ ಈ ಕೆಳಕಂಡಂತಿವೆ: |

| ಕ್ರ ಸಂ | ವಸತಿ ಶಾಲೆ | ಮಂಜೂರಾದ ಹುದ್ದೆಗಳ ಸಂಖ್ಯೆ | | ಖಾಲಿ ಇರುವ ಹುದ್ದೆಗಳ ಸಂಖ್ಯೆ | |
|---|---|---|---|---|---|
| | | ಬೋಧಕ | ಬೋಧಕೇತರ | ಬೋಧಕ | ಬೋಧ ಕೇತರ |
| 1 | ಮೊರಾರ್ಜಿ ದೇಸಾಯಿ ವಸತಿ ಶಾಲೆ | 950 | 1257 | 398 | 1065 |
| 2 | ಮಾದರಿ ವಸತಿ ಶಾಲೆ (ನವೋದಯ) | 168 | 158 | 137 | 149 |
| 3 | ಸರ್ಕಾರಿ ಮುಸ್ಲಿಂ ವಸತಿ ಶಾಲೆ | 45 | 60 | 22 | 19 |
| | ಒಟ್ಟು | 1163 | 1475 | 557 | 1233 |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಇ) | ಸದರಿ ಶಾಲೆಗಳಲ್ಲಿ ಇರುವ ಮೂಲಭೂತ ಸೌಲಭ್ಯಗಳ ಕೊರತೆಗಳಾವುವು; (ವಿವರ ನೀಡುವುದು) | 2019-20ನೇ ಶೈಕ್ಷಣಿಕ ಸಾಲಿನಲ್ಲಿ ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಯ ಅಧೀನದಲ್ಲಿ ಕಾರ್ಯ ನಿರ್ವಹಿಸುತ್ತಿರುವ ವಸತಿ ಶಾಲೆಗಳಿಗೆ ಅಗತ್ಯ ಮೂಲಸೌಲಭ್ಯಗಳಾದ ಕಾಟ್, ಬೆಡ್, ಶುದ್ಧ ಕುಡಿಯುವ ನೀರು (ಆರ್.ಓ ಘಟಕ), ಸೋಲಾರ್ ವಾಟರ್ ಹೀಟರ್, ಸೋಲಾರ್ ಲೈಟಿಂಗ್ಸ್, ಡಿಜಿಟಲ್ ಕ್ಲಾಸ್ ರೂಮ್, ವಿದ್ಯಾರ್ಥಿಗಳ ಸುರಕ್ಷತೆಗಾಗಿ ಸಿ.ಸಿ.ಟಿ.ವಿ ಕ್ಯಾಮರಗಳನ್ನು, ಪ್ರತಿ ವಿದ್ಯಾರ್ಥಿಗೆ ಪ್ರತಿ ಶೈಕ್ಷಣಿಕ ವರ್ಷದಲ್ಲಿ ಅಗತ್ಯ ಲೇಖನಾ ಸಾಮಗ್ರಿ, ನೋಟ್‌ಪುಸ್ತಕ, ಸ್ಕೂಲ್ ಬ್ಯಾಗ್‌ಗಳನ್ನು ಒದಗಿಸಲಾಗುತ್ತಿದೆ, ಎಲ್ಲಾ ವಸತಿ ಶಾಲೆಗಳಲ್ಲಿ ಬಯೋಮೆಟ್ರಿಕ್ ವ್ಯವಸ್ಥೆಯನ್ನು ಅಳವಡಿಸಲಾಗಿದೆ. ಪ್ರಸ್ತುತ 2020-21ನೇ ಸಾಲಿನಲ್ಲಿ ವಸತಿ ಶಾಲೆಗಳನ್ನು ದಿನಾಂಕ:22.02.2021 ರಿಂದ ಸಂಪೂರ್ಣವಾಗಿ ಪ್ರಾರಂಭಿಸಲಾಗಿದ್ದು, ಅಗತ್ಯವಿರುವ ಮೂಲಭೂತ ಸೌಕರ್ಯಗಳನ್ನು ಅವಶ್ಯಕತೆ ಅನುಗುಣವಾಗಿ ಅನುದಾನದ ಲಭ್ಯತೆಯು ಅನುಸಾರ ಕಲ್ಪಿಸಲಾಗುವುದು. |

| | | |
|---|---|---|
| ಈ) | ಸದರಿ ಶಾಲೆಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಬೋಧಕರಿಗೆ ಕಾಲಮಿತಿ ವೇತನ ಬಡ್ತಿ ನೀಡದೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಶಿಕ್ಷಣ ಇಲಾಖೆಯಿಂದ ವರ್ಗಾವಣೆಗೊಂಡ 05 ಸರ್ಕಾರಿ ಮುಸ್ಲಿಂ ವಸತಿ ಶಾಲೆಗಳಲ್ಲಿನ (ಶ್ರೀರಂಗಪಟ್ಟಣ, ದಕ್ಷಿಣ ಕನ್ನಡ, ವಿಜಯಪುರ, ಕಲಬುರಗಿ ಮತ್ತು ರಾಮನಗರ) ಬೋಧಕ/ಬೋಧಕೇತರ ಸಿಬ್ಬಂದಿಗಳಿಗೆ ಕಾಲಮಿತಿ ವೇತನ ಬಡ್ತಿ ನೀಡದಿರುವುದು ಸರ್ಕಾರದ ಗಮನಕ್ಕೆ ಬಂದಿದೆ. |
| ಉ) | ಬಂದಿದ್ದಲ್ಲಿ, ಯಾವ ಕಾಲಮಿತಿಯಲ್ಲಿ ಕಾಲಮಿತಿ ವೇತನ ಬಡ್ತಿ ನೀಡಲಾಗುವುದು? | ಅಲ್ಪಸಂಖ್ಯಾತರ ಮೊರಾರ್ಜಿ ದೇಸಾಯಿ ವಸತಿ ಶಾಲೆ/ಕಾಲೇಜು ಮತ್ತು ಮಾದರಿ ವಸತಿ ಶಾಲೆ (ನವೋದಯ)ಗಳಲ್ಲಿನ ಬೋಧಕ/ಬೋಧಕೇತರ ಸಿಬ್ಬಂದಿಗಳು 2016-17ನೇ ಸಾಲಿನಿಂದ ನೇರ ನೇಮಕಾತಿ ಮೂಲಕ ನೇಮಕಾತಿ ಹೊಂದಿರುವುದರಿಂದ ಕರ್ನಾಟಕ ನಾಗರಿಕ ಸೇವಾ (ಟೈಮ್ ಬೌಂಡ್ ಅಡ್ವಾನ್ಸ್‌ಮೆಂಟ್) ನಿಯಮಗಳು 1983ರನ್ವಯ ಸದರಿ ನೌಕರರು ನೇಮಕಗೊಂಡ ಹುದ್ದೆಯಲ್ಲಿ ಯಾವುದೇ ಮುಂಬಡ್ತಿ ಹೊಂದದೇ 10 ವರ್ಷಗಳ ಸೇವೆಯನ್ನು ಪೂರೈಸಿದ್ದಲ್ಲಿ ಅವರಿಗೆ ಕಾಲಮಿತಿ ವೇತನ ಬಡ್ತಿಯನ್ನು ನೀಡಬೇಕಾಗಿರುತ್ತದೆ. ಈ ಹಿನ್ನೆಲೆಯಲ್ಲಿ ಸದರಿ ನೌಕರರು 10 ವರ್ಷಗಳ ಸೇವೆಯನ್ನು ಪೂರೈಸದಿರುವುದರಿಂದ ಕಾಲಮಿತಿ ವೇತನ ಬಡ್ತಿಗೆ ಅರ್ಹರಿರುವುದಿಲ್ಲ.<br><br>ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ/161/ಸೇ-2/2017, ದಿನಾಂಕ: 06.10.2018ರನ್ವಯ ಶಿಕ್ಷಣ ಇಲಾಖೆಯಿಂದ ವರ್ಗಾವಣೆಗೊಂಡ 05 ಮುಸ್ಲಿಂ ವಸತಿ ಶಾಲೆಗಳಲ್ಲಿನ ಬೋಧಕ/ಬೋಧಕೇತರ ಸಿಬ್ಬಂದಿಗಳನ್ನು ಸರ್ಕಾರಿ ಸೇವೆಯಲ್ಲಿ ವಿಲೀನಾತಿಗೊಳಿಸದಿರುವುದರಿಂದ ಇವರು ಕರ್ನಾಟಕ ನಾಗರೀಕ ಸೇವಾ ನಿಯಮಗಳ ವ್ಯಾಪ್ತಿಯೊಳಗೆ ಪರಿಗಣಿಸಲ್ಪಡದ ಕಾರಣ ಸದರಿ ಸಿಬ್ಬಂದಿಗಳಿಗೆ ಕಾಲಬದ್ಧ ಮುಂಬಡ್ತಿ ಮಂಜೂರು ಮಾಡಲು ಕರ್ನಾಟಕ ನಾಗರೀಕ ಸೇವಾ (ಟೈಮ್ ಬೌಂಡ್ ಅಡ್ವಾನ್ಸ್‌ಮೆಂಟ್) ನಿಯಮಗಳು 1983ರಲ್ಲಿ ಅವಕಾಶ ಇರುವುದಿಲ್ಲ. |

ಸಂಖ್ಯೆ:MWD 50 LMQ 2021

(ಶ್ರೀಮಂತ ಬಾಳಸಾಹೇಬ ಪಾಟೀಲ್)
ಕೈಮಗ್ಗ ಮತ್ತು ಜವಳಿ ಹಾಗೂ
ಅಲ್ಪಸಂಖ್ಯಾತರ ಕಲ್ಯಾಣ ಸಚಿವರು